## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 211 (221)
ಸದಸ್ಯರ ಹೆಸರು : ಶ್ರೀ ಆರ್.ಪ್ರಸನ್ನ ಕುಮಾರ್
ಉತ್ತರಿಸುವ ದಿನಾಂಕ : 04/03/2020
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಹಾಸ್ಟಲ್‌ಗಳಲ್ಲಿ ವಿದ್ಯಾರ್ಥಿಗಳಿಗೆ ಶುದ್ಧ ಕುಡಿಯುವ ನೀರು, ಮಲಗಲು ಮಂಚ, ಹಾಸಿಗೆ ದಿಂಬು ಮತ್ತು ಹೊದಿಕೆಗಳು ಸಾಕಷ್ಟು ಪ್ರಮಾಣದಲ್ಲಿ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಕೊರತೆಯನ್ನು ನೀಗಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಸರ್ಕಾರದ ಗಮನಕ್ಕೆ ಬಂದಿದೆ. ಈ ಕೊರತೆಯನ್ನು ನೀಗಿಸಲು ರಾಜ್ಯವಲಯದಿಂದ 2018-19ನೇ ಸಾಲಿಗೆ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಈ ಕೆಳಕಂಡ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ.<br>• **<u>ಶುದ್ಧ ಕುಡಿಯುವ ನೀರು</u>:-** ವಿದ್ಯಾರ್ಥಿನಿಲಯಗಳಲ್ಲಿ ಶುದ್ಧ ಕುಡಿಯುವ ನೀರು ಕಲ್ಪಿಸಲು ವಾಟರ್ ಪ್ಯೂರಿಫೈಯರ್ ಇಲ್ಲದೇ ಇರುವ 198 ವಿದ್ಯಾರ್ಥಿನಿಲಯಗಳಿಗೆ ರೂ.2.97 ಕೋಟಿಗಳ ಅನುದಾನವನ್ನು ಕೆಟಿಪಿಪಿ ನಿಯಮವಳಗಳನ್ವಯ ಜಿಲ್ಲಾಮಟ್ಟದಲ್ಲಿ ಅನುಷ್ಟಾನಗೊಳಿಸಲು ಕ್ರಮವಹಿಸಲಾಗಿದೆ.<br>• **<u>ಮಲಗಲು ಮಂಚ</u>:-** 2018-19ನೇ ಸಾಲಿಗೆ ವಿದ್ಯಾರ್ಥಿನಿಲಯಗಳಿಗೆ ಮಲಗಲು ಮಂಚಗಳನ್ನು ಒದಗಿಸುವ ಸಂಬಂಧ 10651 ಟೂ ಟಯರ್ ಕಾಟ್‌ಗಳನ್ನು ರಾಜ್ಯವಲಯದಿಂದ ರೂ.19.71 ಕೋಟಿಗಳ ವೆಚ್ಚದಲ್ಲಿ 21302 ವಿದ್ಯಾರ್ಥಿಗಳಿಗೆ ಸೌಲಭ್ಯ ಒದಗಿಸಲಾಗಿದೆ. 2019-20ನೇ ಸಾಲಿಗೆ ಅಗತ್ಯವಿರುವ ಟೂ ಟಯರ್ ಕಾಟ್‌ಗಳನ್ನು ರೂ.15.00 ಕೋಟಿಗಳ ವೆಚ್ಚದಲ್ಲಿ ಒದಗಿಸಲು ಸಚಿವ ಸಂಪುಟದ ಅನುಮೋದನೆ ದೊರೆತಿದ್ದು, ಕೆಟಿಪಿಪಿ ನಿಯಮಗಳನ್ವಯ ನಿಯಮನುಸಾರ ಖರೀದಿಸಲು ಕ್ರಮವಹಿಸಲಾಗುತ್ತಿದೆ.<br>• **<u>ಹಾಸಿಗೆ ಮತ್ತು ದಿಂಬು</u>:-** 2018-19ನೇ ಸಾಲಿನಲ್ಲಿ ಇಲಾಖೆಯ ವಿದ್ಯಾರ್ಥಿನಿಲಯಗಳಿಗೆ ಅಗತ್ಯವಿರುವ 61382 ಸಂಖ್ಯೆಯ ಪ್ಯಾಕೆಟ್ ಸ್ಪ್ರಿಂಗ್ ಮ್ಯಾಟ್ರಸ್‌ಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘರವರಿಂದ ನಿಯಮಾನುಸಾರ ಖರೀದಿಸಲಾಗಿದೆ. 2019-20ನೇ ಸಾಲಿಗೆ ಅಗತ್ಯವಿರುವ 36,648 ಸಂಖ್ಯೆಯ ಹಾಸಿಗೆ ಮತ್ತು ದಿಂಬುಗಳನ್ನು ರೂ.18.32 ಕೋಟಿಗಳ ವೆಚ್ಚದಲ್ಲಿ ಖರೀದಿಸಲು ಸಚಿವ ಸಂಪುಟದ ಅನುಮೋದನೆ ಕೋರಲಾಗಿದೆ. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| | | • **ಹೊದಿಕೆ:-** 2018-19ನೇ ಸಾಲಿನಲ್ಲಿ ಇಲಾಖೆಯ ವಿದ್ಯಾರ್ಥಿನಿಲಯಗಳಿಗೆ ಅಗತ್ಯವಿರುವ 61.382 ಸಂಖ್ಯೆಯ ಹೊದಿಕೆಗಳನ್ನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು ರವರಿಂದ ನಿಯಮಾನುಸಾರ ಖರೀದಿಸಲು ಕ್ರಮವಹಿಸಲಾಗಿದೆ. 2019-20ನೇ ಸಾಲಿಗೆ ಅಗತ್ಯವಿರುವ 71,209 ಸಂಖ್ಯೆಯ ಜಮಖಾನ ಬೆಡಶೀಟ್ ಹಾಗೂ ಬೆಡ್‌ಸ್ಪ್ರೆಡ್‌ಗಳನ್ನು ರೂ.6.15 ಕೋಟಿಗಳ ವೆಚ್ಚದಲ್ಲಿ ಒದಗಿಸಲು ಸಚಿವ ಸಂಪುಟದ ಅನುಮೋದನೆ ಕೋರಲಾಗಿದೆ.<br><br>ಪರಿಶಿಷ್ಟ ವರ್ಗಗಳ ಇಲಾಖಾ ವತಿಯಿಂದ ನಡೆಯುತ್ತಿರುವ ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸಲಾಗಿದೆ. 2016-17 ಮತ್ತು 2017-18 ನೇ ಸಾಲಿನಲ್ಲಿ ಟೂ ಟಯರ್ ಕಾಟ್ ಮತ್ತು ಬೆಡ್ಸ್ ಮತ್ತು ಪಿಲ್ಲೋಸ್ ಒದಗಿಸಲಾಗಿದೆ. ವಿವರ ಈ ಕೆಳಕಂಡಂತಿದೆ. |

| ಕ್ರ. ಸಂ | ವರ್ಷ | ವಿವರ | ಸರಬರಾಜು ಮಾಡಿರುವ ಸಾಮಾಗ್ರಿಗಳ ಸಂಖ್ಯೆ | ಒಟ್ಟು ಮೊತ್ತ (ರೂ. ಕೋಟಿಗಳಲ್ಲಿ) |
|---|---|---|---|---|
| 1. | 2016-17 | ಟೂ ಟಯರ್ ಕಾಟ್ | 1835 | 3.01 |
| 2 | | ಬೆಡ್ಸ್ ಮತ್ತು ಪಿಲ್ಲೋಸ್ | 11696 | 4.86 |
| 3 | 2017-18 | ಟೂ ಟಯರ್ ಕಾಟ್ | 3350 | 5.60 |
| 4 | | ಬೆಡ್ಸ್ ಮತ್ತು ಪಿಲ್ಲೋಸ್ | 2924 | 1.22 |
| | | ಒಟ್ಟು | | 14.69 |

2019-20 ನೇ ಸಾಲಿನಲ್ಲಿ 1627 ಟೂ ಟಯರ್ ಕಾಟ್‌ಗಳನ್ನು ರೂ.2.97 ಕೋಟಿಗಳ ವೆಚ್ಚದಲ್ಲಿ ವಿದ್ಯಾರ್ಥಿನಿಲಯಗಳಿಗೆ ಒದಗಿಸಲು ಕ್ರಮವಹಿಸಲಾಗುತ್ತಿದೆ.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಹಲವಾರು ಹಾಸ್ಟಲ್‌ಗಳಲ್ಲಿ ವಿದ್ಯಾರ್ಥಿಗಳಿಗೆ ಸರಿಯಾದ ಸಮಯದಲ್ಲಿ, ಸರಿಯಾದ ಪ್ರಮಾಣದಲ್ಲಿ ಮುಂಜಾನೆಯ ಉಪಹಾರ, ಮದ್ಯಾಹ್ನದ ಊಟ ಮತ್ತು ರಾತ್ರಿಯ ಊಟಗಳು ದೊರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ವಿದ್ಯಾರ್ಥಿಗಳಿಗೆ ಸರಿಯಾದ ಸಮಯಕ್ಕೆ ಪೋಷಕಾಂಶಯುಕ್ತ ಗುಣಮಟ್ಟದ ಆಹಾರ ದೊರೆಯುವಂತಾಗಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ರಾಜ್ಯದಲ್ಲಿ ಸಮಾಜ ಕಲ್ಯಾಣ ಇಲಾಖಾ ವತಿಯಿಂದ ನಿರ್ವಹಿಸಲಾಗುತ್ತಿರುವ ವಿದ್ಯಾರ್ಥಿನಿಲಯಗಳಲ್ಲಿ ಪೋಷಕಾಂಶಯುಕ್ತ ಉತ್ತಮ ಗುಣಮಟ್ಟದ ಅಹಾರಗಳನ್ನು ಸರಿಯಾದ ಸಮಯದಲ್ಲಿ ಸರಿಯಾದ ಪ್ರಮಾಣದಲ್ಲಿ ನೀಡುವ ಕುರಿತು ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕ ಮತ್ತು ಕರಾವಳಿ ಪ್ರದೇಶಗಳನ್ನಾಗಿ ವಿಂಗಡಿಸಿ, ಆಯಾ ಪ್ರದೇಶದಲ್ಲಿ ಜನರು ಸೇವಿಸುವ ಆಹಾರ ಪದ್ಧತಿಯಂತೆ ಭೋಜನದ ವ್ಯವಸ್ತೆಯನ್ನು ಕಲ್ಪಿಸಲು ಪರಿಷ್ಕೃತ ಮೆನು ಚಾರ್ಟ್ ನೀಡಿ ಅದರಂತೆ ಉಪಹಾರ ಹಾಗೂ ಊಟವನ್ನು ನೀಡಲಾಗುತ್ತಿದೆ. |
| ಇ) | ಈ ಹಾಸ್ಟಲ್‌ಗಳಲ್ಲಿ ಸೋಲಾರ್ ವ್ಯವಸ್ಥೆಯನ್ನು ಅಳವಡಿಸಲಾಗಿದೆಯೇ; ಇಲ್ಲವಾದಲ್ಲಿ, ಅಳವಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಸಮಾಜ ಕಲ್ಯಾಣ ಇಲಾಖೆಯ ಸ್ವಂತ ಕಟ್ಟಡವನ್ನು ಹೊಂದಿರುವ ವಿದ್ಯಾರ್ಥಿನಿಲಯಗಳಲ್ಲಿ ಸೋಲಾರ್ ವಾಟರ್ ಹೀಟರ್‌ಗಳನ್ನು ಅಳವಡಿಸಲಾಗಿರುತ್ತದೆ ಆದಾಗ್ಯೂ 2019-20ನೇ ಸಾಲಿಗೆ ಸೋಲಾರ್ ವಾಟರ್ ಹೀಟರ್ ವ್ಯವಸ್ಥೆ ಇಲ್ಲದೇ ಇರುವ 215 ವಿದ್ಯಾರ್ಥಿನಿಲಯಗಳಲ್ಲಿ ಸೋಲಾರ್ ವಾಟರ್ ಹೀಟರ್‌ಗಳನ್ನು ರೂ.12.14 ಕೋಟಿಗಳ ವೆಚ್ಚದಲ್ಲಿ ನಿಯಮಾನುಸಾರ ಖರೀದಿಸಲು ಸಚಿವ ಸಂಪುಟದ ಅನುಮತಿಯನ್ನು ಪಡೆದು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ 87 ವಿದ್ಯಾರ್ಥಿನಿಲಯಗಳಿಗೆ ಸೋಲಾರ್ ವಾಟರ್ ಹೀಟರ್ ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಹಂತ ಹಂತವಾಗಿ ಎಲ್ಲಾ ವಿದ್ಯಾರ್ಥಿನಿಲಯಗಳಿಗೆ ಸೋಲಾರ್ ವಾಟರ್ ಹೀಟರ್ ಹಾಗೂ ಸೋಲಾರ್ ಲೈಟಿಂಗ್ ವ್ಯವಸ್ಥೆಯನ್ನು ಕಲ್ಪಿಸಲು ಕ್ರಮ ವಹಿಸಲಾಗುವುದು. |

ಸಕಇ 121 ಪಕವಿ 2020

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು